


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 1956(2238)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನೌಕರರ ಸೇವೆಯ ಬಗ್ಗೆ

(ಅ) 2002 ರಿಂದ 2012ರ ವರೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವ್ಯಾಪ್ತಿಯಲ್ಲಿ (ಸಚಿವಾಲಯ ಸೇರಿದಂತೆ) ಸರ್ಕಾರಿ ನೌಕರರಲ್ಲದ ದಿನಗೂಲಿ ಹಾಗೂ ಕರಾರು ಒಪ್ಪಂದದ ಮೇಲೆ ಕೆಲಸ ಮಾಡಿದ ನೌಕರರುಗಳ ಸಂಖ್ಯೆ ಎಷ್ಟು; (ಹುದ್ದೆವಾರು ನೌಕರರುಗಳ ಹೆಸರು, ನೇಮಕಾತಿ ಆದೇಶ ಪ್ರತಿ, ವೇತನದ ಮಾಹಿತಿ ಒದಗಿಸುವುದು)

(ಆ) ಸದರಿ ದಿನಗೂಲಿ ಹಾಗೂ ಕರಾರು ಒಪ್ಪಂದದ ಮೇಲೆ ಕೆಲಸ ಮಾಡಿದ ನೌಕರರುಗಳಿಗೆ ಕ.ಸ.ಸೇ(ಪ್ರೊಬೇಷನರಿ) ನಿಯಮಾವಳಿಗಳು 1977 ನಿಯಮ 5 ರೀತ್ಯಾ ಪರೀಕ್ಷಾರ್ಥ ಅವಧಿ ಘೋಷಿಸಿರುವುದು ನಿಜವೇ; ಹೌದಾದಲ್ಲಿ, ಯಾವ ಮಾನದಂಡದ ರೀತ್ಯಾ ಸದರಿ ನೌಕರರುಗಳಿಗೆ ಪರೀಕ್ಷಾರ್ಥ ಅವಧಿ ಘೋಷಿಸಲಾಗಿದೆ; (ಪರೀಕ್ಷಾರ್ಥ ಅವಧಿ ಘೋಷಿಸಿದ ನೌಕರರ ಹೆಸರುಗಳೊಂದಿಗೆ ಆದೇಶದ ಪ್ರತಿ ಹಾಗೂ ಇಲಾಖಾ ಪರೀಕ್ಷೆಗಳ ಪ್ರಮಾಣ ಪತ್ರಗಳನ್ನು ಮತ್ತು ಪರೀಕ್ಷಾರ್ಥ ಅವಧಿ ಘೋಷಿಸದೆ ಇರುವ ನೌಕರರ ವಿವರ ಒದಗಿಸುವುದು)

(ಇ) 2010 ರಿಂದ 2021ರ ಅವಧಿಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಪತ್ರಾಂಕಿತ ಹುದ್ದೆಗಳನ್ನು ಬಡ್ತಿ ನೀಡಲು ನಿಯಮಾನುಸಾರ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ನಡೆಸಲಾಗಿದೆಯೇ; ನಡೆಸಿದ್ದಲ್ಲಿ, ಸದರಿ ಅವಧಿಯಲ್ಲಿ ಯಾವ ಯಾವ ಅಧಿಕಾರಿಗಳಿಗೆ ಯಾವ ಯಾವ ಹುದ್ದೆಗಳಿಗೆ ಮುಂಬಡ್ತಿ ನೀಡಲಾಗಿದೆ? (ಆದೇಶದ ಪ್ರತಿಗಳೊಂದಿಗೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡಾವಳಿ ಪ್ರತಿಗಳನ್ನು ಒದಗಿಸುವುದು)